# ಸ್ವ–ಅಭಿವ್ಯಕ್ತಿಯನ್ನು ಸುಗಮಗೊಳಿಸಲು ಕಲಾ–ಸಂಯೋಜಿತ ಪಾಠಗಳು

ವಿಶ್ವನಾಥ್

***

ಈ ಸಾಂಕ್ರಾಮಿಕ ರೋಗದ ಪರಿಣಾಮಗಳಿಂದ ಮೊದಲಾಗುವ ಅನಿಷ್ಟ ನಿವಾರಣೆಯ ಪಯಣವನ್ನು ಪ್ರಾರಂಭಿಸುವಾಗ ನಾವು ನಮ್ಮ ಸುತ್ತಲಿನ ಎಲ್ಲರಿಗೂ ಕಾಳಜಿ ತೋರುವುದನ್ನು ಮುಂದುವರಿಸಬೇಕು. ನೈರ್ಮಲ್ಯ ಹಾಗೂ ಪ್ರಾಕೃತಿಕ ಪರಿಸರದ ಸಂರಕ್ಷಣೆಗೆ ಹೆಚ್ಚಿನ ಗಮನ ನೀಡುವುದರಿಂದ ನಮ್ಮ ಅಷ್ಟೇನೂ ಆರೋಗ್ಯಕರವಲ್ಲದ ಹಲವು ರೂಢಿಗತ ಅಭ್ಯಾಸಗಳನ್ನು ಹಾಗೂ ಜೀವನ ವಿಧಾನಗಳನ್ನು ಬದಲಾಯಿಸಿಕೊಳ್ಳಲು ಇದು ಒಂದು ಅವಕಾಶವಾಗಿದೆ. ಶಾಲೆಗಳಲ್ಲಿ ಮಕ್ಕಳು ಆರಾಮವಾಗಿ ಇರುವಂತೆ ಮಾಡಬಲ್ಲ ಸುರಕ್ಷತೆಯ ಹಾಗೂ ಸ್ವಾಗತ ಕೋರುವ ಪರಿಸರವನ್ನು ನಿರ್ಮಿಸುವುದು ಶಿಕ್ಷಣ ಮತ್ತು ಕಲಿಕೆಗಳನ್ನು ಸಾಧಿಸುವ ನಮ್ಮ ಕಾರ್ಯನೀತಿಯಾಗಿದೆ.

ಶಾಲೆಗಳು ಮುಚ್ಚಿ ಒಂದು ವರ್ಷದ ಮೇಲಾಗಿದೆ ಹಾಗೂ ಬಹುತೇಕ ಮಕ್ಕಳು ತಾವು ಶಾಲೆಯಲ್ಲಿ ಏನನ್ನು ಕಲಿತಿದ್ದರೋ ಅದನ್ನೆಲ್ಲಾ ಮರೆತಿದ್ದಾರೆ. ಅವರ ಓದುವ ಹಾಗೂ ಬರೆಯುವ ಕೌಶಲಗಳನ್ನು ಪುನಾ ಕಟ್ಟಿಕೊಡಬೇಕಾದ ಸಮಯವಿದು. ಅವರು ಭಾವನಾತ್ಮಕವಾಗಿ ಇದಕ್ಕೆ ಸಿದ್ಧರಿದ್ದಾರೆ ಎಂಬುದನ್ನು ಅರಿತ ಬಳಿಕ ಮಾತ್ರ ನಾವು ಇದನ್ನು ಕೈಗೊಳ್ಳಬಹುದಾಗಿದೆ. ಇಂದು ಶಿಕ್ಷಕರಷ್ಟೇ ಅಲ್ಲದೆ ಸಮಗ್ರ ಶಿಕ್ಷಣ ವ್ಯವಸ್ಥೆಯೇ ಪಾಠಗಳನ್ನು ಹೇಗೆ ಯೋಜಿಸಬೇಕು, ಎಲ್ಲಿಂದ ಮುಂದುವರಿಸಿಕೊಂಡು ಹೋಗಬೇಕು, ಮಕ್ಕಳ ಹಿಂದಿನ ಕಲಿಕೆಯನ್ನು ಅಳೆದು ನೋಡುವುದು ಹೇಗೆ ಎಂಬುದರ ವಿಚಾರವಾಗಿ ಗೊಂದಲದಲ್ಲಿದೆ.

**ಕಲಾ–ಚಟುವಟಿಕೆಗಳ ಮೂಲಕ ಕಲಿಕೆ**

ಮಕ್ಕಳಿಗೆ ಸಂತಸದ ಕಲಿಕಾ ಅನುಭವವನ್ನು ನೀಡುವುದು ಅತಿಮುಖ್ಯವಾಗುತ್ತದೆ. ಮಕ್ಕಳು ತಮ್ಮ ಹಾಗೂ ತಮ್ಮ ಶಾಲಾ ಆವರಣದಲ್ಲಿನ ಇತರರ ರಕ್ಷಣೆಗಾಗಿ ಅಗತ್ಯವಿರುವ ಸುರಕ್ಷತೆಯ ನಿಯಮಗಳನ್ನು ಪಾಲಿಸುತ್ತಾರೆ ಎಂಬುದನ್ನು ನೋಡಿಕೊಳ್ಳುವುದೂ ಅಷ್ಟೇ ಮುಖ್ಯವಾಗುತ್ತದೆ. ಇದರೊಂದಿಗೆ, ಶಿಕ್ಷಕರು ಸೂಕ್ಷ್ಮ ರೀತಿಗಳಲ್ಲಿ ಈ ಸಮಯದಲ್ಲಿ ಅವರಿಗೆ ಹೇಗೆ ಅನಿಸುತ್ತಿದೆ ಎಂಬುದನ್ನು ಮುಕ್ತವಾಗಿ ಅಭಿವ್ಯಕ್ತಿಸಲು ನೆನಪಿಸುತ್ತಾ ಇರಬೇಕಾಗುತ್ತದೆ. ಶಿಕ್ಷಕರು ಏನನ್ನು ಮಾಡಬಹುದು ಎಂಬುದರ ವಿಚಾರವಾಗಿ ಕೆಲವು ಚಿಂತನೆಗಳು ಇಲ್ಲಿವೆ.

• ಪ್ರತಿ ಮಗುವಿಗೂ ಕಾಳಜಿ ಹಾಗೂ ಆದರಗಳನ್ನು ತೋರುವ ಧೋರಣೆಯ ಕಡೆಗೆ ಗಮನವನ್ನು ಕೇಂದ್ರೀಕರಿಸಬೇಕು

• ಶಾಲೆಯ ಒಳಗೆ ಮಕ್ಕಳು ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು, ಅಭಿವ್ಯಕ್ತಿಸಲು ಭಯರಹಿತ ವಾತಾವರಣ ಇರುವಂತೆ ನೋಡಿಕೊಳ್ಳಬೇಕು.

• ಕೋವಿಡ್ ಮುನ್ನೆಚರಿಕೆ ಕ್ರಮಗಳನ್ನು ಪಾಲಿಸುತ್ತಲೇ, ಮಕ್ಕಳು ಪರಸ್ಪರ ಬೆರೆಯಲು ಸಹಾಯಕವಾಗುವ ಗುಂಪು ಚಟುವಟಿಕೆಗಳನ್ನು ಆಯೋಜಿಸಬೇಕು

• ಸ್ಥಳೀಯ ಸಂಪ್ರದಾಯಗಳನ್ನು, ಜಾನಪದ ಕಥೆಗಳನ್ನು ಹಾಗೂ ಹಾಡುಗಳನ್ನು ಮಕ್ಕಳಿಗೆ ಪರಿಚಯಿಸುವಂತೆ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳನ್ನು ಹಾಗೂ ಪೋಷಕರನ್ನು ಶಾಲೆಗೆ ಆಹ್ವಾನಿಸಬೇಕು.

• ಎಲ್ಲಾ ತರಗತಿಯ ಹಾಗೂ ವಿಷಯಗಳ ಪಾಠಯೋಜನೆಗಳೊಂದಿಗೆ ಕಲೆಯನ್ನು ಬೆಸೆಯುವ ಮೂಲಕ ಮಕ್ಕಳಲ್ಲಿ ಸೃಜನಶೀಲತೆಯನ್ನು ಉತ್ತೇಜಿಸುವಂತಹ ಚಟುವಟಿಕೆಗಳನ್ನು ಆಯೋಜಿಸಬೇಕು.

• ಸ್ಥಳೀಯ ಸಂಪನ್ಮೂಲಗಳನ್ನು ಹಾಗೂ ತ್ಯಾಜ್ಯ ಸಾಮಗ್ರಿಗಳನ್ನು ಬಳಸಿಕೊಂಡು, ಪೋಷಕರು ಹಾಗೂ ಶಾಲಾ ಮಕ್ಕಳ ಸೋದರ–ಸೋದರಿಯರ ಸಹಾಯಪಡೆದು ಕಲಾತ್ಮಕ ವಸ್ತುಗಳನ್ನು ಸೃಷ್ಟಿಸುವ ಪ್ರಕ್ರಿಯೆಗೆ ಉತ್ತೇಜನ ನೀಡಬೇಕು.

**ಶಾಲೆಯ ಮೊದಲ ದಿನ**

ಕಲ್ಬುರ್ಗಿಯ ಅಜೀಂ ಪ್ರೇಮ್ಜಿ ಶಾಲೆಯಲ್ಲಿ ಶಾಲೆ ತೆಗೆಯುವ ಮೊದಲ ದಿನ ಮಕ್ಕಳು ಶಾಲೆಗೆ ಮರಳುವ ಸಂತಸವನ್ನು ಅನುಭವಿಸುವಂತೆ ಮಾಡಲು ನಾವು ಕೆಲವು ಚಿತ್ರಕಲೆಯ, ಜೇಡಿಮಣ್ಣಿನಿಂದ ಮಾದರಿಗಳನ್ನು ಮಾಡುವ ಹಾಗೂ ಆಟಗಳನ್ನು ಆಡುವ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ತಯಾರಿ ನಡೆಸಿದ್ದೆವು. ಇದು ಹೊಸತಾಗಿ ಬರುವ ಮಕ್ಕಳಿಗೆ ನಮ್ಮ ಶಾಲೆಯ ಸಂಸ್ಕೃತಿಯನ್ನು ಪರಿಚಯಮಾಡಿಕೊಡಲು ಪ್ರೇರಣೆಯನ್ನು ಒದಗಿಸಿ, ಸಹಪಾಠಿಗಳ ನಡುವೆ ಹೆಚ್ಚಿನ ಒಡನಾಟವನ್ನು ಪ್ರೋತ್ಸಾಹಿಸುವಂತಿತ್ತು. ಮಕ್ಕಳು ತಾವು ರಚಿಸಿದ ಕಲಾಕೃತಿಗಳ ಬಗ್ಗೆ ಮಾತನಾಡುವ, ತಮ್ಮ ಕವನ, ಹಾಡುಗಳನ್ನು ಹಂಚಿಕೊಳ್ಳುವ, ತಮ್ಮದೇ ಸಂಗೀತ ಸಂಯೋಜಿಸುವ, ಅಡಗೆ ಮನೆಯ ಸಾಮಗ್ರಿಗಳನ್ನು, ಪ್ಲಾಸ್ಟಿಕ್ ಸೀಸೆಗಳನ್ನು, ಇತರ ಸ್ವಾಭಾವಿಕ ವಸ್ತುಗಳನ್ನು ಬಳಸಿ ವಿವಿಧ ಸಂಗೀತ ವಾದ್ಯಗಳ ಸ್ವರಗಳನ್ನು ಅನ್ವೇಷಿಸುವ ಪ್ರದರ್ಶನವೊಂದನ್ನು ಹಾಗೂ ಮಕ್ಕಳಿಗೆ ಪುನಶ್ಚೇತನ ನೀಡುವಂತಹ ಭೌತಿಕ ಕ್ರೀಡೆಗಳನ್ನು ನಾವು ಆಯೋಜಿಸುವವರಿದ್ದೆವು. ವಿವಿಧ ಶೈಕ್ಷಣಿಕ ವಿಷಯಗಳ ವಿಭಿನ್ನ ಪರಿಕಲ್ಪನೆಗಳನ್ನು ಕಲಿಯುವ ಆಸಕ್ತಿಯನ್ನು ಬೆಳೆಸುವುದಕ್ಕಾಗಿ ಸರ್ವ ಪ್ರಯತ್ನಗಳನ್ನೂ ಕೈಗೊಳ್ಳಲು ಸಿದ್ಧತೆ ನಡೆಸಿದ್ದೆವು.

ಸಾಂಕ್ರಾಮಿಕ ರೋಗದ ಸಂದರ್ಭದಲ್ಲಿ ಸಮುದಾಯದ ವಿಭಿನ್ನ ಕಲಿಕೆಯ ತಾಣಗಳಿಗೆ ಪ್ರತ್ಯೇಕವಾಗಿ ಬೋಧನೆ–ಕಲಿಕೆ ಸಾಮಗ್ರಿಗಳನ್ನು ತಲುಪಿಸುವ ಕಾರ್ಯದಲ್ಲಿ ನಾವು ಅನೇಕ ಸವಾಲುಗಳನ್ನು ಎದುರಿಸಿದೆವು. ಮಕ್ಕಳೊಡನೆ ಆನ್ ಲೈನ್ ಹಾಡುಗಳನ್ನು ಕೇಳಿಸಿಕೊಳ್ಳುವಲ್ಲಿ ಹಾಗೂ ವಿಡಿಯೋಗಳನ್ನು ಹಂಚಿಕೊಳ್ಳುವಲ್ಲಿ ಅಂತರ್ಜಾಲ ಸಂಪರ್ಕದ ಅಡಚಣೆಗಳನ್ನು ಎದುರಿಸಬೇಕಾಯಿತು. ಸಮುದಾಯ ತರಗತಿಗಳಲ್ಲಿ ಜಾಗದ ಕೊರತೆಯಿಂದಾಗಿ ಹೆಚ್ಚಿನ ಮಕ್ಕಳನ್ನು ತಲುಪುವ ನಮ್ಮ ಆಶಯಕ್ಕೆ ಕಡಿವಾಣ ಬಿತ್ತು. ತಂಡಗಳಲ್ಲಿ ಕಲೆಯಬಹುದಾದ ಸಂಖ್ಯೆಯ ಮೇಲಿದ್ದ ನಿರ್ಬಂಧದ ಕಾರಣದಿಂದ ಮಕ್ಕಳಿಗೆ ಸ್ಥಳೀಯ ಕಲಾರೂಪಗಳ ಪರಿಚಯ ಮಾಡಿಸಲು ಸ್ಥಳೀಯ ಕಲಾವಿದರನ್ನು ಹಾಗೂ ಸಂಪನ್ಮೂಲ ವ್ಯಕ್ತಿಗಳನ್ನು ಆಹ್ವಾನಿಸುವ ನಮ್ಮ ಯೋಜನೆಗಳನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕಾಯಿತು. ಅತಿಮುಖ್ಯ ಸಂಗತಿಯೆಂದರೆ, ಪ್ರತಿ ಮಗುವಿನ ಕಲಿಕಾ–ಫಲಿತಾಂಶಗಳಿಗೆ ವೈಯಕ್ತಿಕವಾಗಿ ಗಮನ ನೀಡುವುದು ಸಾಧ್ಯವಾಗದೇ ಹೋಯಿತು. ಆದರೆ, ಈ ಎಲ್ಲಾ ಸವಾಲುಗಳ

ನಡುವೆ ಮಕ್ಕಳು ಸಮುದಾಯ ತರಗತಿಗಳಲ್ಲಿ ನೀಡಲಾದ ಕಲೆಗೆ ಸಂಬಂಧಿಸಿದ ಚಟುವಟಿಕೆಗಳನ್ನು ಇಷ್ಟಪಟ್ಟರು. ಇವುಗಳ ಮೂಲಕ ಅವರು ತಮ್ಮ ಪಾಡಿಗೆ ತಾವೇ ಅನೇಕ ಸಂಗತಿಗಳನ್ನು ಅನ್ವೇಷಿಸಲು ಸಾಧ್ಯವಾಗಿ, ಅವರ ಸೃಜನಶೀಲ ಸಾಮರ್ಥ್ಯಗಳಲ್ಲಿ ಅತ್ಮವಿಶ್ವಾಸವನ್ನು ಬೆಳಸಿಕೊಂಡರು. ಶಾಲೆಗಳು ಮತ್ತೊಮ್ಮೆ ತೆರೆದ ಬಳಿಕ ನಾವು ಇದೇ ರೀತಿಯ ಆಚರಣೆಗಳನ್ನು ಮುಂದುವರಿಸಿಕೊಂಡು ಹೋಗುವ ಯೋಜನೆ ಹಾಕಿಕೊಂಡಿದ್ದೇವೆ.

ಶಾಲೆ ಇಷ್ಟರಲ್ಲೇ ತೆರೆಯಲಿದ್ದು, ನಾವು ನಮ್ಮ ದಿನನಿತ್ಯದ ಚಟುವಟಿಕೆಗಳಿಗೆ ಮರಳಬಹುದು ಎಂದಷ್ಟೇ ಸದ್ಯದ ಹಾರೈಕೆಯಾಗಿದೆ. ಶಾಲಾ ಆವರಣಗಳಲ್ಲಿ ನಡೆಯುವ ತರಗತಿಗಳಿಗೆ ನಾವು ಮರಳಿದಾಗ ಮಕ್ಕಳಿಗೆ ಕಲಿಸುವುದರಲ್ಲಿ ನಾವು ಇದುವರೆಗೂ ಎದುರಿಸುತ್ತಿರುವ ಹಲವು ಕಷ್ಟಗಳು ಕಣ್ಮರೆಯಾಗುತ್ತವೆ. ಪ್ರತಿ ಮಗುವಿನೊಂದಿಗೆ ವೈಯಕ್ತಿಕವಾಗಿ ಒಡನಾಡಿದಾಗಲೇ ಪರಿಣಾಮಕಾರಿಯಾಗಿ ಕಲಿಸಲು ಸಾಧ್ಯ. ಮಕ್ಕಳು ತಂಡಗಳಲ್ಲಿ ಪಾಲ್ಗೊಳ್ಳುವುದು ಹಾಗೂ ಸಹಪಾಠಿಗಳೊಡನೆ ಕಲೆತು ಕಲಿಯುವುದು ನಿರ್ಣಾಯಕವಾಗುವಂತಹ ಭೌತಿಕ ಚಟುವಟಿಕೆಗಳನ್ನು ಹಾಗೂ ಕಲಾರೂಪಗಳನ್ನು ಆಗ ನಾವು ಪರಿಚಯಿಸಬಹುದು. ಎಲ್ಲಕ್ಕಿಂತ ಮುಖ್ಯ ಸಂಗತಿಯೆಂದರೆ, ಆಗ ನಾವು ಮಗುವಿನ ಕಲಿಕೆ ಹಾಗೂ ಅದರ ಸರ್ವಾಂಗೀಣ ಅಭಿವೃದ್ಧಿಯ ಮೇಲೆ ಪ್ರಭಾವ ಬೀರುವ ಪೌಷ್ಟಿಕ ಆಹಾರ ಮಗುವಿಗೆ ನಿಯಮಿತವಾಗಿ ದೊರೆಯುವ ಭರವಸೆ ನೀಡಲು ಸಾಧ್ಯವಾಗುತ್ತದೆ.

**ಚಟುವಟಿಕೆಗಳೊಂದಿಗೆ ನಮ್ಮ ಅನುಭವ**

ಕೋವಿಡ್ ಕಾರಣದಿಂದಾಗಿ ಶಾಲೆಗಳು ಮುಚ್ಚಿದಾಗ ಮಕ್ಕಳು ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡಲು ನಾವು ನಡೆಸಿದ ಕೆಲವು ಚಟುವಟಿಕೆಗಳನ್ನು ನಿಮ್ಮೊಡನೆ ಹಂಚಿಕೊಳ್ಳುತ್ತಿದ್ದೇನೆ. ಮಕ್ಕಳು ಮಾತನಾಡಲು ಹಾಗೂ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸಲು ಅವರಿಗೆ ಆಸರೆಯಾಗಬಲ್ಲ ಕೆಲವು ಅಭ್ಯಾಸಗಳನ್ನು ಮೊದಲಿಗೆ ನಾವು ಪ್ರಾರಂಭಿಸಿದಾಗ ಅವರು ಅತಿಹೆಚ್ಚು ಸ್ಪಂದಿಸುವಂತೆ ಮಾಡಿದ್ದು ಕಲಾ ಚಟುವಟಿಕೆಗಳು ಮತ್ತು ಸಂಗೀತ. ಮಕ್ಕಳ ಕಲಿಕೆ ನಲಿವಿನಿಂದ ಕೂಡಿರಲಿ ಎಂಬ ಆಶಯದಿಂದ ನಾವು ಇದರೊಂದಿಗೆ ಕೆಲವು ಮೋಜಿನ ಚಟುವಟಿಕೆಗಳನ್ನು ಕೂಡ ಹಮ್ಮಿಕೊಂಡಿದ್ದೆವು.

ಸಾಂಕ್ರಾಮಿಕ ರೋಗದ ಸಂದರ್ಭದಲ್ಲಿ ಮಕ್ಕಳು ಮೊದಲು ಶುಚಿತ್ವ ಹಾಗೂ ಸುರಕ್ಷತಾ ಕ್ರಮಗಳ ಬಗ್ಗೆ ಕಲಿಯುವಂತೆ ಮಾಡಲು ಅವರಿಗೆ *ಬೈ ಬೈ ಕೊರೋನಾ ನೀನು ಹೋಗಲೇ ಬೇಕಿದೆ* ಹಾಗೂ, ಇಂಗ್ಲೀಷಿನಲ್ಲಿ, *ವಾಶ್, ವಾಶ್, ವಾಶ್ ಯುವರ್ ಹ್ಯಾಂಡ್ಸ್, ವಾಶ್ ಯುವರ್ ಹ್ಯಾಂಡ್ಸ್ ಟುಗೆದರ್* ಹಾಡುಗಳನ್ನು ಹೇಳಿಕೊಟ್ಟೆವು. ಈ ಹಾಡುಗಳನ್ನು ಹೇಳಿಕೊಡುವಾಗ ನಾವು ಸ್ಯಾನಿಟೈಜರ್ ಹಾಕಿಕೊಂಡು ಕೈಗಳನ್ನು ಉಜ್ಜುವ ಅತ್ಯುತ್ತಮ ವಿಧಾನವನ್ನು ಅವರೆದುರು ಪ್ರದರ್ಶಿಸಿದೆವು. ಮೊದಲಿಗೆ, ಮಕ್ಕಳು ಹಾಡಲು ಹಿಂಜರಿದರು. ನಾವು ಶಿಕ್ಷಕರು ಹಾವ–ಭಾವಗಳೊಂದಿಗೆ, ಕ್ರಿಯೆಯ ಅಭಿವ್ಯಕ್ತಿಯೊಂದಿಗೆ ಈ ಹಾಡನ್ನು ಹಾಡಿದೆವು. ನಾವೆಲ್ಲ ಎದ್ದು ನಿಂತು, ನಮ್ಮ ದೇಹದ ಭಾಗಗಳನ್ನು ಬಳುಕಿಸುತ್ತಾ ಹಾಡನ್ನು ರಾಗವಾಗಿ ಹಾಡಿದಾಗ ಮಕ್ಕಳಿಗೆ ಅದು ಮೆಚ್ಚಿಗೆಯಾಯಿತು. ತದನಂತರ, ನಾವು ಕ್ರಮೇಣ ಕೆಲವು ಇಂಗ್ಲಿಷ್ ಅಕ್ಷರಗಳನ್ನು, ಮಾಸ್ಕ್, ಸ್ಯಾನಿಟೈಜರ್, ವೈರಸ್, ಸೋಷಿಯಲ್ ಡಿಸ್ಟೆನ್ಸಿಂಗ್, ಲಾಕ್ಡೌನ್, ಅನ್ ಲಾಕ್ ಹಾಗೂ ಸೀಲ್ ಡೌನ್ ಎಂಬ ಪದಗಳ ಅರ್ಥಗಳನ್ನು ಮಕ್ಕಳಿಗೆ ಪರಿಚಯಿಸಿದೆವು. ಮಕ್ಕಳು ಸ್ಯಾನಿಟೈಜರ್ ಬಳಸುವಾಗ ಈ ಹಾಡನ್ನು ಹಾಡಲು ತೊಡಗುತ್ತಿದ್ದು, ಸಾವಕಾಶವಾಗಿ ಈ ಪದಗಳ ಅರ್ಥಗಳನ್ನು ಪರಿಚಯಮಾಡಿಕೊಂಡು ತಮ್ಮ ದಿನನಿತ್ಯದ ಸಂಭಾಷಣೆಯಲ್ಲಿ ಬಳಸಲು ಮೊದಲು

ಮಾಡಿದರು. ಕೆಲವು ಮಕ್ಕಳು ಕನ್ನಡದಲ್ಲಿ ತಮ್ಮದೇ ಹಾಡುಗಳನ್ನು ರಚಿಸಿಕೊಂಡು ತಮ್ಮದೇ ರಾಗಗಳಲ್ಲಿ ಅವನ್ನು ಹಾಡಿದ್ದೇ ಅಲ್ಲದೆ, ಅವುಗಳನ್ನು ಯುಟ್ಯೂಬ್ ಗೆ ಅಪ್ ಲೋಡ್ ಕೂಡ ಮಾಡಿದರು. ಹಳೆ ಕಾಗದ ಬಳಸಿ ಮಾಸ್ಕ್ ಮಾಡುವುದು ಹೇಗೆ ಎಂದು ಹೇಳಿಕೊಟ್ಟಾಗ ಮಕ್ಕಳು ವಿಶೇಷವಾಗಿ ಆನಂದಿಸಿದರು. ಮಾಸ್ಕ್ ಮಾಡಲು ಕಲಿತ ಬಳಿಕ ಮನೆಯಲ್ಲಿಯೂ ತಮ್ಮ-ತಂಗಿಯರಿಗೆ, ಪೋಷಕರಿಗೆ ಅವುಗಳನ್ನು ಮಾಡಿಕೊಟ್ಟರು.



ಕೊರೋನಾ ರೋಗದ ವೈರಾಣುವಿನ ಬಗ್ಗೆಗೆ ಲಭ್ಯವಿದ್ದ ಮಾಹಿತಿಯ ಆಧಾರದ ಮೇಲೆ ಅದರ ಚಿತ್ರಗಳನ್ನು ಬಿಡಿಸಿದ್ದಷ್ಟೇ ಅಲ್ಲದೆ, ತಾವು ಅದನ್ನು ಕಲ್ಪಿಸಿಕೊಂಡಿದ್ದಂತೆಯೂ ಬಿಡಿಸಿದರು. ಅವರು ತಮ್ಮ ರಚನೆಗಳನ್ನು ಕುರಿತು ಮಾತನಾಡಿದರು.




ಕೆಲವು ಮಕ್ಕಳು ಕೋಲಾಟದ ಕೋಲುಗಳನ್ನು ತಯಾರಿಸಿಕೊಂಡು ಕೋಲಾಟದ ಹಾಡಿನ ತಾಳಕ್ಕೆ ನರ್ತಿಸಿದರು. ಮಕ್ಕಳು ಸಂಕೋಚ ಬದಿಗಿರಿಸಿ ಬೆರೆಯುವಂತೆ ಮಾಡಲು ಜಾನಪದ ಹಾಡುಗಳನ್ನು ಪರಿಚಯಿಸುವುದು ನಮ್ಮ ಗುರಿಯಾಗಿತ್ತು. ಕೆಲವು ಮಕ್ಕಳು ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು ಹಿಂದೇಟು ಹಾಕುತ್ತಿದ್ದರು. ನಾವು ಅವರಿಗೆ ಅವರ ಯೋಚನೆಗಳನ್ನು, ಅವರ ಭಾವನೆಗಳನ್ನು ಮುಕ್ತವಾಗಿ ದಿನಚರಿಯ ರೂಪದಲ್ಲಿ ದಾಖಲಿಸಲು ಹೇಳಿದೆವು. ಮಕ್ಕಳು ವಿವಿಧ ಆಕಾರಗಳ (ಚಿತ್ರದಲ್ಲಿ ತೋರಿಸಿರುವಂತೆ ವೃತ್ತಾಕಾರದ, ಚೌಕಾಕಾರದ, ಆಯತಾಕಾರದ, ಅನಿಯತಾಕಾರದ) ದಿನಚರಿ ಪುಸ್ತಕಗಳನ್ನು ರಚಿಸಿಕೊಂಡು ಬಂದರು. ಅವುಗಳಲ್ಲಿ ಅವರು ಇಂಗ್ಲಿಷ್ ಭಾಷೆಯಲ್ಲಿ ದಿನಚರಿ ಬರೆದು, ತಮ್ಮ ಭಾವನೆಗಳನ್ನು ಪ್ರತಿನಿಧಿಸುವ "ಎಮೋಜಿ"ಗಳನ್ನು ಬಿಡಿಸಿಕೊಂಡು ಬಂದಿದ್ದರು.



ಮಕ್ಕಳು ಒಬ್ಬರು ಇನ್ನೊಬ್ಬರ ಅಂಗೈಗಳಿಗೆ ಬಣ್ಣ ಬಳೆದು, ಅದನ್ನು ಕಾಗದದ ಮೇಲೆ ಒತ್ತಿ ಮೂಡಿಸಿದ ತಮ್ಮ ಹಸ್ತಮುದ್ರಿಕೆಗಳನ್ನು ತಂದಿದ್ದರು. ಈ ಚಟುವಟಿಕೆ ಅವರು ತಮ್ಮ ಸಹಪಾಠಿಗಳೊಡನೆ ಒಡನಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದರಿಂದ ಕ್ರಮೇಣ ಅವರಿಗೆ ಮಾತನಾಡಲು, ಸಂವಹನ ನಡೆಸಲು ಹಿಂದಿಗಿಂತಲೂ ತಾವು ಹೆಚ್ಚು ಸಿದ್ಧರಿರುವಂತೆ ಅನ್ನಿಸಿತು. ಅವರು ಜೇಡಿಮಣ್ಣಿನಿಂದ ಆಕೃತಿ ರಚನೆಯ ಚಟುವಟಿಕೆಯನ್ನು, ಹಾಗೂ ಶಂಖ, ಮಣಿ, ಕಪ್ಪೆಚಿಪ್ಪುಗಳಂತಹ ಉಪಯೋಗಕ್ಕೆ ಬಾರದ ವಸ್ತುಗಳಿಂದ ಕಂಠಾಭರಣಗಳನ್ನು ರಚಿಸಿಕೊಂಡರು. ಮಕ್ಕಳು ಹೊಲಿಗೆಯಂತಹ ಪ್ರಾಯೋಗಿಕ ಕೌಶಲಗಳನ್ನು ಕಲಿತರು. ಅವರು ಬಟ್ಟೆಯ ಮೇಲೆ ತಮ್ಮ-ತಮ್ಮ ಹೆಸರುಗಳನ್ನು ಹೊಲಿಗೆಯ ಮೂಲಕ ಮೂಡಿಸಲು ಸಾಧ್ಯವಾಯಿತು. ಟೀ ಲೋಟಗಳ ಮೇಲೆ ಬಣ್ಣದ ಚಿತ್ರಗಳನ್ನು ಬಿಡಿಸಿ, ಅವುಗಳೊಳಗ್ಗೆ ಬೀಜ ಬಿತ್ತಿ, ಅವು ಮೊಳಕೆಯೊಡೆದು ಬೆಳೆಯುವುದನ್ನು ನೋಡುತ್ತಾ, ಅವುಗಳಿಗೆ ದಿನವೂ ನೀರೂಡಿಸುತ್ತಾ, ಅವುಗಳ ದೈನಂದಿನ ಬೆಳವಣಿಗೆಯನ್ನು ದಾಖಲಿಸುತ್ತಾ ನಲಿದರು. ಮನೆಯಲ್ಲಿ ಆಡಲು ಚೌಕಾಭಾರ, ಹಾವು-ಏಣಿ ಹಾಗು ಚದುರಂಗದ ಆಟಗಳಿಗೆ ಫಲಕಗಳನ್ನು ರಚಿಸಿಕೊಂಡರು. ಇದು ಅವರಿಗೆ ಆಕೃತಿಗಳನ್ನು, ಸರಳ ರೇಖೆಗಳನ್ನು ಹಾಗೂ ಒಂದರಿಂದ ನೂರರವರೆಗಿನ ಸಂಖ್ಯೆಗಳನ್ನು ಕಲಿಯಲು ನೆರವಾಯಿತು.




***

**ವಿಶ್ವನಾಥ್** ಅವರು ಕಲಬುರ್ಗಿಯ ಅಜೀಂ ಪ್ರೇಮ್ಜಿ ಶಾಲೆಯಲ್ಲಿ ಸಂಗೀತದ ಶಿಕ್ಷಕರಾಗಿದ್ದಾರೆ. ಗುಲ್ಬರ್ಗ ವಿಶ್ವವಿದ್ಯಾಲಯದಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಶಾಸ್ತ್ರೀಯ ಸಂಗೀತ (ಹಾಡುಗಾರಿಕೆ) ಹಾಗೂ ಹಾರ್ಮೋನಿಯಮ್ ನುಡಿಸುವುದನ್ನು ತಮ್ಮ ತಂದೆ, ಗುರು ಪಂಡಿತ ತೇವಯ್ಯ ವಸ್ತ್ರದಮಠ ಅವರಿಂದ ಕಲಿತಿದ್ದಾರೆ. ಅವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: vishwanath@azimpremjifoundation.org

ಕನ್ನಾಡುನುವಾದ: ಕುಶಲ್